**ಕರ್ನಾಟಕ ವಿಧಾನ ಪರಿಷತ್ತು**

| | | | |
|---|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 603+604 |
| 2. | ಸದಸ್ಯರ ಹೆಸರು | : | ಶ್ರೀ ಎನ್. ರವಿಕುಮಾರ್<br>(ವಿಧಾನಸಭೆಯಿಂದ ಚುನಾಯಿತರಾದವರು) |
| 3. | ಉತ್ತರಿಸುವ ದಿನಾಂಕ | : | 04-03-2021 |
| 4. | ಉತ್ತರಿಸುವವರು | : | ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ದಕ್ಷಿಣ ತಾಲ್ಲೂಕು, ಕೃಷ್ಣರಾಜ ಪುರ ಹೋಬಳಿ, ಕೃಷ್ಣರಾಜಪುರ ಗ್ರಾಮದ ಸರ್ವೆ ಸಂಖ್ಯೆ: 58ರ ಸರ್ಕಾರಿ ಕೆರೆಯ ಪ್ರಸ್ತುತ ವಿಸ್ತೀರ್ಣವೆಷ್ಟು? 1991ಕ್ಕಿಂತ ಮುಂಚೆ ಇದ್ದ ಕೆರೆಯ ವಿಸ್ತೀರ್ಣವೆಷ್ಟು; ಈ ಕೆರೆಯು ಯಾವ ಇಲಾಖೆಯ ಅಧೀನಕ್ಕೆ ಬರುತ್ತದೆ; | ಬೆಂಗಳೂರು ಪೂರ್ವ ತಾಲ್ಲೂಕು ಕೆ.ಆರ್.ಪುರಂ ಹೋಬಳಿ ಕೆ.ಆರ್.ಪುರಂ ಗ್ರಾಮದ ಸರ್ವೆ ಪ್ರಕಾರ ಸರ್ವೆ ನಂ.58 ರಲ್ಲಿ ಇರುವ ಸರ್ಕಾರಿ ಕೆರೆಯ ಒಟ್ಟು ವಿಸ್ತೀರ್ಣ 18 ಎಕರೆ 32 ಗುಂಟೆ ಇದ್ದು, 1991 ಕ್ಕೆ ಮುಂಚಿತವಾಗಿಯೂ ಸಹಾ ಈ ಕೆರೆಯ ಒಟ್ಟು ವಿಸ್ತೀರ್ಣ 18 ಎಕರೆ 32 ಗುಂಟೆಯಾಗಿರುತ್ತದೆ. ಸದರಿ ಕೆರೆಯ ಪ್ರಸ್ತುತ ಪಹಣಿಯನ್ನು ಪರಿಶೀಲಿಸಲಾಗಿ, ಕಾಲಂ ನಂ.9 ರಲ್ಲಿ ಅರಣ್ಯ ಎಂದು ನಮೂದಾಗಿರುತ್ತದೆ ಹಾಗೂ ತಹಸೀಲ್ದಾರ್ ರವರ ವರದಿಯಂತೆ ಪ್ರಸ್ತುತ ಕೆರೆಗೆ ಬಿಬಿಎಂಪಿಯ ಕೆರೆಗಳ ವಿಭಾಗದಿಂದ ತಂತಿ ಬೇಲಿ ನಿರ್ಮಿಸಲಾಗಿರುತ್ತದೆ.<br><br>ಪ್ರಸ್ತುತ ಕೆರೆಯನ್ನು ಸರ್ಕಾರದ ಆದೇಶ ಸಂಖ್ಯೆ: ನಅಇ 39 ಬೆಂಆಸೇ 2019 ದಿನಾಂಕ: 11-12-2019 ರ ಆದೇಶದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ನಿರ್ವಹಣೆ ಮತ್ತು ಅಭಿವೃದ್ಧಿಗಾಗಿ ಹಸ್ತಾಂತರಿಸಲಾಗಿರುತ್ತದೆ. |
| ಆ | ಸದರಿ ಸರ್ಕಾರಿ ಕೆರೆಯನ್ನು ಒತ್ತುವರಿ ಮಾಡಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಒತ್ತುವರಿಯಾದ ಜಾಗದ ವಿಸ್ತೀರ್ಣವೆಷ್ಟು;? | ಸದರಿ ಸರ್ಕಾರಿ ಕೆರೆಯ ಒತ್ತುವರಿಯನ್ನು ಮಾಡಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಮಾನ್ಯ ಸದನ ಸಮಿತಿಯ ಸೂಚನೆಯಂತೆ ಮತ್ತು ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂ ದಾಖಲೆಗಳ ಇಲಾಖೆ ರವರ ಆದೇಶದನ್ವಯ ತಯಾರಿಸಿರುವ ನಕ್ಷೆಯಂತೆ ಕೆ.ಆರ್. ಪುರ ಗ್ರಾಮದ ಸರ್ವೆ ನಂ. 58 ರಲ್ಲಿರುವ ಸರ್ಕಾರಿ ಕೆರೆಯ ಒಟ್ಟು ವಿಸ್ತೀರ್ಣ 18 ಎಕರೆ 32 ಗುಂಟೆ ಇದ್ದು, ಈ ಪೈಕಿ 2-17.04 ಎಕರೆ ಪ್ರದೇಶವು ಖಾಸಗಿ ಒತ್ತುವರಿಯಾಗಿದ್ದು, ಸರ್ಕಾರಿ ಒತ್ತುವರಿ 0-16.08 ಗುಂಟೆಯಾಗಿರುತ್ತದೆ ಎಂದು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ರವರು ವರದಿ ಮಾಡಿರುತ್ತಾರೆ. |

..2/-

| | | |
|---|---|---|
| ಇ | ಕಂದಾಯ ಇಲಾಖೆಯ ಜಮೀನಿಗೆ ಕೊಳಚೆ ನಿರ್ಮೂಲನಾ ಮಂಡಳಿಯವರು ಯಾವ ನಿಯಮದ ಪ್ರಕಾರ ಸ್ವಾಧೀನ ಪತ್ರವನ್ನು ನೀಡಬಹುದು; ಇದನ್ನು ಯಾವ ಕಾನೂನಿನ ಅಡಿಯಲ್ಲಿ ಅಧಿಕೃತವೆಂದು ಪರಿಗಣಿಸಲಾಗಿದೆ? | ಬೆಂಗಳೂರು ಪೂರ್ವ ತಾಲ್ಲೂಕು ಕೃಷ್ಣರಾಜಪುರ ಹೋಬಳಿ, ಕೃಷ್ಣರಾಜಪುರ ಗ್ರಾಮದ ಸರ್ವೆ ನಂ. 58ರ ಕೆರೆ ಪ್ರದೇಶಕ್ಕೆ ಹೊಂದಿಕೊಂಡಿರುವ ಅದೇ ಹೋಬಳಿಯ ದೇವಸಂದ್ರ ಗ್ರಾಮದ ಸರ್ವೆ ನಂ. 44/1, 44/2 ಮತ್ತು 44/3ರ ಪ್ರದೇಸವು ಅಧಿಸೂಚನೆ ಸಂಖ್ಯೆ: ಕೆಎಸ್‌ಎಸಿಆರ್/9/94-95, ದಿನಾಂಕ: 15-07-1996ರಲ್ಲಿ ಕರ್ನಾಟಕ ಕೊಳಚೆ (ಅಭಿವೃದ್ಧಿ ಮತ್ತು ನಿರ್ಮೂಲನೆ) 1973ರ ಕಾಯ್ದೆ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಣೆಯಾಗಿರುತ್ತದೆ. ಮಂಡಳಿ ಕಾಯ್ದೆ ಕಲಂ 4(2)ರ ಪ್ರಕಾರ ಅಧಿಸೂಚಿತ ಪ್ರದೇಶದಲ್ಲಿ ಪರಿಚಯ ಪತ್ರ / ಸ್ವಾಧೀನ ಪತ್ರ ನೀಡಲು ಅವಕಾಶವಿರುತ್ತದೆ. ಮಂಡಳಿ ಕಾಯ್ದೆ ಹಾಗೂ ತಿದ್ದುಪಡಿ ಆದೇಶ ಸಂಖ್ಯೆ: ವಇ 102 ಎಸ್‌ಬಿಎಂ 2002, ದಿನಾಂಕ: 18-12-2004ರ ತಿದ್ದುಪಡಿ ಅಧಿಸೂಚನೆಯಂತೆ ಕೊಳಚೆ ನಿವಾಸಿಗಳಿಗೆ ಪರಿಚಯ ಪತ್ರ / ಸ್ವಾಧೀನ ಪತ್ರ ನೀಡಲಾಗಿದೆ. ಮಂಡಳಿ ಕಾಯ್ದೆ ಪ್ರಕಾರ ಪರಿಚಯ ಪತ್ರ / ಸ್ವಾಧೀನ ಪತ್ರಗಳನ್ನು ಸದರಿ ಕೊಳಚೆ ನಿವಾಸಿಗಳು ವಾಸವಾಗಿರುವ ಬಗ್ಗೆ ಗುರುತಿನ ಚೀಟಿಯಾಗಿರುತ್ತದೆ. |
| ಈ | ನಿಯಮ ಬಾಹಿರವಾಗಿ ಕೊಳಚೆ ನಿರ್ಮೂಲನಾ ಮಂಡಳಿಯ ಅಧಿಕಾರಿಗಳು ತಮ್ಮದಲ್ಲದ ಇಲಾಖೆಯ ವ್ಯಾಪ್ತಿಗೆ ಬರದಿರುವ ಜಾಗಕ್ಕೆ ಸ್ವಾಧೀನ ಪತ್ರ ನೀಡಿರುವುದಾದರೆ ಅಂತಹ ಅಧಿಕಾರಿಗಳ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ; ಕ್ರಿಮಿನಲ್ ಮೊಕದ್ದಮೆ ದಾಖಲಿಸಲಾಗಿದೆಯೇ; ಇಲ್ಲವಾದಲ್ಲಿ ಯಾವ ಕಾಲಮಿತಿಯೊಳಗೆ ಪ್ರಕರಣ ದಾಖಲಿಸಲಾಗುವುದು? | ಮಂಡಳಿಯ ಕಾಯ್ದೆಯ ಪ್ರಕಾರ ಘೋಷಿತ ಕೊಳಚೆ ಪ್ರದೇಶಗಳ ನಿವಾಸಿಗಳಿಗೆ ಪರಿಚಯ ಪತ್ರ / ಸ್ವಾಧೀನ ಪತ್ರ ವಿತರಿಸಲಾಗಿದೆ. |

**ಸಂಖ್ಯೆ: ನಅಇ 56 ಎಂಎನ್‌ವೈ 2021 (ಇ)**

ಬಿ.ಎಸ್. ಯಡಿಯೂರಪ್ಪ

**(ಬಿ.ಎಸ್. ಯಡಿಯೂರಪ್ಪ)**

ಮುಖ್ಯಮಂತ್ರಿ